# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್ : 114

6ನೇ ವರ್ಷ 37 ನೇ ಸಂಚಿಕೆ ಕೊಪ್ಪ 10-4-1988 ಭಾನುವಾರ ಬೆಲೆ 50 ಪೈಸೆ




## ದಲಿತ ಸಂಘರ್ಷ ಸಮಿತಿಯ ನ. ರಾ. ಪುರ ತಾ॥ ಶಾಖೆ ಉದ್ಘಾಟನೆ

ನ. ರಾ. ಪುರ : ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಈ ತಾಲ್ಲೂಕಿನ ಶಾಖೆಯನ್ನು ಏ. 2ರಂದು ಸಂಘದ ಜಿಲ್ಲಾ ಸಮಿತಿ ಸದಸ್ಯ ಎ. ಕೆ. ಮಂಜಪ್ಪ ಉದ್ಘಾಟಿಸಿದರು. ರಾಜ್ಯ ಸಂಘಟನಾ ಸಂಚಾಲಕ ಎಂ. ಡಿ. ಗಂಗಯ್ಯ ಅಧ್ಯಕ್ಷತೆ ವಹಿಸಿದ್ದರು.

ಪತ್ರಕರ್ತ ಸಿರಿಮನೆ ನಾಗರಾಜ್ ಮತ್ತು ಜಿಲ್ಲಾ ಸಮಿತಿ ಸದಸ್ಯ ಕೆ. ಭದ್ರಯ್ಯ ಮುಖ್ಯ ಅತಿಥಿಗಳಾಗಿದ್ದರು. ಸ್ಥಳೀಯ ಪುರಸಭಾ ಸದಸ್ಯ ಮುಳ್ಳಯ್ಯ ಮತ್ತು ಜಿ.ಪ. ಸದಸ್ಯ ಮೂಗ ಚಂದ್ರಶೇಖರ್ ಅವರುಗಳೂ ಉಪಸ್ಥಿತರಿದ್ದರು. ಸಣ್ಣ ತಿಮ್ಮಯ್ಯ ಸ್ವಾಗತಿಸಿದರು. ಶೃಂಗೇರಿ ಮತ್ತು ಸಂಗಮೇಶ್ವರಪೇಟೆಯ ದ. ಸಂ. ಸ. ಕಾರ್ಯಕರ್ತರು ಕ್ರಾಂತಿಗೀತೆಗಳನ್ನು ಹಾಡಿದರು.

## ಗಂಧ ಸಹಿತ ಕಾರು ವಶ; ಆರೋಪಿಗಳ ಪರಾರಿ

ನ.ರಾ.ಪುರ: 40 ಸಾವಿರ ರೂ. ಬೆಲೆಯ ಸುಮಾರು 400 ಕಿಲೊ ಶ್ರೀಗಂಧದೊಂದಿಗೆ ಗಡಿಗೇಶ್ವರ–ಚಿಕ್ಕಗ್ರಹಾರ ಸಮೀಪ ಕಂಡು ಬಂದ ಕಾರೊಂದನ್ನು (ಸಿಎಜಿ 3055) ಇಲ್ಲಿನ ಅರಣ್ಯ ಸಿಬ್ಬಂದಿ ಮಾಲು ಸಮೇತ ವಶಪಡಿಸಿಕೊಂಡಿದ್ದಾರೆ.

ಅಪರಾಧಿಗಳನ್ನು ಇಲಾಖೆಯ ಜೀಪಿನಲ್ಲಿ ಬಹಳ ಚಾಕಚಕ್ಯತೆಯಿಂದ 50–60 ಕಿ.ಮೀ. ದೂರ ಬೆನ್ನಟ್ಟಿ ಮುತ್ತಿನಕೊಪ್ಪ–ನಿಲಗದ್ದೆ ಬಳಿ ಕಾರನ್ನು ತಡೆಯುವಲ್ಲಿ ಡ್ರೈವರ್ ಹನುಮಂತ ಯಶಸ್ವಿಯಾದರೂ. ಆದರೆ ಉಳಿದ ಸಿಬ್ಬಂದಿ ಸ್ಥಳಕ್ಕೆ ಇಲಾಖೆಯ ಇನ್ನೊಂದು ಲಾರಿಯಲ್ಲಿ ತಲುಪುವುದರೊಳಗೆ ಆರೋಪಿಗಳು ಅವರಿಂದ ನುಣುಚಿಕೊಂಡು ಪರಾರಿಯಾದರು. ರೇಂಜರ್ ಜವರೇಗೌಡರು ತನಿಖೆ ನಡೆಸುತ್ತಿದ್ದಾರೆ.

### ಅಡಿಕೆ ಧಾರಣೆ

ಶಿವಮೊಗ್ಗ 7–4–1988

ಸರಕು 3800 – 4550

ಬೆಟ್ಟೆ 2500 – 3380

ಗೊರಬಲು : 800 – 1335

### ಏಲಕ್ಕಿ ಧಾರಣೆ

ಮಂಗಳೂರು 8.4.1988

ಏಲಕ್ಕಿ : 140 – 160

ಕಾಳು ಮೆಣಸು: 4002

## ಸಂಕ್ಷಿಪ್ತ ಸುದ್ದಿಗಳು

### ವಾಲಿಬಾಲ್ ಪಂದ್ಯಾವಳಿ

ಕಮ್ಮರಡಿ : ಇಲ್ಲಿನ ಗಜಾನನ ವಾಲಿಬಾಲ್ ಸಂಘ ಮತ್ತು ಯುವಜನ ಸೇವಾ ಇಲಾಖೆ ಸಂಯುಕ್ತಾಶ್ರಯದಲ್ಲಿ ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳ ಮಟ್ಟದ ವಾಲಿಬಾಲ್ ಪಂದ್ಯಾವಳಿ ಇಲ್ಲಿ ಮಾ. 24 ಮತ್ತು 25ರಂದು ನಡೆಯಿತು. ಮಂಡಲ ಪ್ರಧಾನ ಕೃಷ್ಣಪ್ಪ ಗೌಡರು ಉದ್ಘಾಟಿಸಿದರು. ಐ. ಲಕ್ಷ್ಮೀನಾರಾಯಣ ಅಡಿಗ ಮುಖ್ಯ ಅತಿಥಿಯಾಗಿದ್ದರು.

ಮುಕ್ತಾಯ ಸಮಾರಂಭದಲ್ಲಿ ಇಲ್ಲಿನ ಹಿರಿಯ ವಾಲಿಬಾಲ್ ಕ್ರೀಡಾಪಟು ಕೆ. ಎಸ್. ಕೃಷ್ಣಮೂರ್ತಿ ಬಹುಮಾನ ವಿತರಣೆ ಮಾಡಿದರು. ಉಪಪ್ರಧಾನ ಶ್ರೀಪಾದ ಜೋಯಿಸ್ ಮುಖ್ಯ ಅತಿಥಿಯಾಗಿದ್ದರು.

ಎರಡೂ ದಿನಗಳಂದು ರಾತ್ರಿ ಹೆಗ್ಗೋಡಿನ 'ನೀನಾಸಂ' ತಂಡದವರು 'ಮಿಸ್ ಸದಾರಮೆ' ಮತ್ತು 'ಅಲಿಬಾಬಾ' ನಾಟಕಗಳನ್ನು ಪ್ರದರ್ಶಿಸಿದರು.

### ಶಟಲ್ ಜಯ

ಕೊಪ್ಪದ ಜಾಲಿ ಫ್ರೆಂಡ್ಸ್ ಶಟಲ್ ಬ್ಯಾಡ್ಮಿಂಟನ್ ಅಸೋಸಿಯೇಶನ್ ಮಾ. 28 ರಿಂದ 31ರವರೆಗೆ ನಡೆಸಿದ ಹೊನಲು–ಬೆಳಕಿನ ಶಟಲ್ ಬ್ಯಾಡ್ಮಿಂಟನ್ ಪಂದ್ಯಾವಳಿಯ ಸಿಂಗಲ್ಸ್‌ನಲ್ಲಿ ಜಹೀರ್ ಅಬ್ಬಾಸ್ ಗೆದ್ದು ಶೇಖ್ ಅಹಮದ್ ರನ್ನರ್–ಅಪ್ ಸ್ಥಾನ ಪಡೆದರು. ಡಬಲ್ಸ್‌ನಲ್ಲಿ ಇದೇ ಜೋಡಿ ಬಿಂದು ಮತ್ತು ಮಂಜು ಜೋಡಿಯ ಮೇಲೆ ಜಯಿಸಿ ಪ್ರಶಸ್ತಿ ಗಳಿಸಿದರು.

## ಜಿಲ್ಲಾ ಪರಿಷತ್ ಅಧ್ಯಕ್ಷತೆ : ಮೂಗಾ ಪ್ರತಿಕ್ರಿಯೆ

'ಅಧಿಕಾರ ವಿಕೇಂದ್ರೀಕರಣಕ್ಕಾಗಿ' ಎಂದುಕೊಂಡು ಜಿಲ್ಲಾ ಪರಿಷತ್ತು, ಮಂಡಲ ಪಂಚಾಯ್ತಿಗಳು ಚಲಾವಣೆಗೆ ಬಂದರೂ, ಅದರ ಅರ್ಥ 'ಪಕ್ಷದವರೊಳಗೆ ಅಧಿಕಾರ ಹಂಚಿಕೆಗಾಗಿ' ಎಂಬಂತಾಗಿರುವುದು ಸುಳ್ಳೇನಲ್ಲ. ಬಹುತೇಕ ಎಲ್ಲ ಜಿ. ಪ. ಗಳಲ್ಲೂ ಅಧ್ಯಕ್ಷಗಿರಿಯ ಹಂಚಿಕೆ ಒಂದೊಂದು ವರ್ಷ ಒಬ್ಬೊಬ್ಬನಿಗೆ ಎಂಬ ಒಪ್ಪಂದಗಳೇರ್ಪಟ್ಟಿರುವುದೇ ಇದಕ್ಕೆ ನಿದರ್ಶನ.

ನಮ್ಮ ಚಿಕ್ಕಮಗಳೂರು ಜಿ. ಪ. ಕೂಡ ಇದಕ್ಕೆ ಹೊರತಲ್ಲ. ಜಿಲ್ಲಾ ಮಂತ್ರಿ, ಜಿಲ್ಲಾ ಬ್ಯಾಂಕ್ ಅಧ್ಯಕ್ಷ, ಪಕ್ಷದ ಜಿಲ್ಲಾ ಅಧ್ಯಕ್ಷ—ಎಲ್ಲರೂ ಮಲೆನಾಡಿನವರೇ ಹಾಗೂ ಒಕ್ಕಲಿಗರೇ ಎಂಬ ಕಾರಣವೇ ಪ್ರಧಾನವಾಗಿ, ಬಯಲುಸೀಮೆಯವರೂ ಒಕ್ಕಲಿಗರಲ್ಲದವರೂ ಆದ (ಹಿಂದು ಹಿಂದುಳಿದ ಜನಾಂಗಕ್ಕೆ ಸೇರಿದ) ಕೆ. ಎಂ ಕೃಷ್ಣಮೂರ್ತಿ ಅಧ್ಯಕ್ಷರಾದರು. ಆದರೆ ಅವರಿಗೆ 1 ವರ್ಷದ ಗಡುವು ಇತ್ತು.

ಇದೀಗ ಅವರ 'ಅವಧಿ' ಮುಗಿದಿದೆ. ಒಡಂಬಡಿಕೆ ಪ್ರಕಾರ ಈಗ ಮೂಗ ಚಂದ್ರಶೇಖರ್ ಸರದಿಯಂತೆ. ಆದರೆ ಬಯಲು ಸೀಮೆಯವರಿಗೆ ತಮ್ಮವರೇ ಮುಂದುವರಿಯಲಿ ಎಂಬ ಆಸೆ. ಇದಕ್ಕಾಗಿ ಮುಖ್ಯಮಂತ್ರಿಗಳ ಬಳಿ, ಪತ್ರಿಕೆಗಳಲ್ಲಿ, ವೇದಿಕೆಗಳಲ್ಲಿ, ಅಲ್ಲಿ–ಇಲ್ಲಿ 'ಲಾಬಿ' ನಡೆದಿದೆ.

ಆದರೆ ಕೃಷ್ಣಮೂರ್ತಿಯವರು ಅಧ್ಯಕ್ಷರಾಗಿ ಒಳ್ಳೆಯ ಹೆಸರೇನೂ ಗಳಿಸಿಲ್ಲ. ಶಿಕ್ಷಕರ ಮತ್ತು ಇತರ ಕೆಲ ಸಿಬ್ಬಂದಿಗಳ ವರ್ಗಾವರ್ಗಿ ಮತ್ತು ಇತರ ಹಲವಾರು ಸಂದರ್ಭಗಳಲ್ಲಿ ಯಥೇಚ್ಛವಾಗಿ ಜೇಬು ತುಂಬಿಸಿಕೊಂಡಿದ್ದಾರೆಂಬ ಪುಕಾರು ತೀರಾ ಬಹಿರಂಗವಾಗಿಯೇ ಪ್ರಚಲಿತದಲ್ಲಿದೆ.

ಚಿಕ್ಕಮಗಳೂರಿನಲ್ಲಿ ವಾಸ ಮಾಡದೆ ಕೇವಲ ಪ್ರವಾಸ ಭತ್ಯೆದ ಆಸೆಗಾಗಿಯೇ ಕಡೂರಿನಿಂದ ಚಿಕ್ಕಮಗಳೂರಿಗೆ ಇಡೀ ವರ್ಷ 'ಅಧಿಕೃತ' ಪ್ರಯಾಣ ಮಾಡಿದರೆಂಬುದಂತೂ ಹಳತಾಗಿ ಹೋಗಿರುವ ನೇರ ಆರೋಪ.

ಸಾಮಾಜಿಕ ಅರಣ್ಯ ಯೋಜನೆಗಾಗಿ ತರಿಸಲಾದ ಗೊಬ್ಬರವನ್ನು ತನ್ನ ಜಮೀನಿಗೆ ಲೋಡುಗಟ್ಟಲೆ ಸಾಗಿಸಿದ್ದಾರೆಂಬ ಪುಕಾರೂ ಕೂಡ ಈಚೆಗೆ ಹಬ್ಬಿದೆ.


(3ನೇ ಪುಟಕ್ಕೆ)

# 'ಹಾಲಿನ ಹೊಳೆ' ಎಂಬ ಮಂತ್ರಿಗಳ ಹಳಿಯಿಲ್ಲದ ರೈಲು, 'ಲುಕ್ಸಾನು' ಎಂಬ ಡೈರಿ ಅಧಿಕಾರಿಗಳ ಬುರುಡೆ ಲೆಕ್ಕ !

ಸಂಪಾದಕರೆ,

ಛಲ ಬಿಡದ ತ್ರಿವಿಕ್ರಮನಂತೆ ನೀವು ಹಾಸನ ಡೈರಿ ನೌಕರವರ ಬೆನ್ನು ಹತ್ತಿರುವುದು ನೋಡಿದರೆ, ನೀವು ತ್ರಿವಿಕ್ರಮನನ್ನೂ ಮೀರಿಸುವಂತೆ ತೋರುತ್ತದೆ. ನಿಮಗೆ ಬರವಣಿಗೆಯ ಆಯಾಸ ಪರಿಹಾರ ಮಾಡಲೆಂದು ಈ ಕೆಲವು ವಿಚಾರಗಳನ್ನು ಹೇಳುತ್ತೇನೆ.

1) ಎಲ್ಲಾ ಆಹಾರ ವಸ್ತುಗಳ ಬೆಲೆಗಳೂ, ಜಾನುವಾರುಗಳ ಹಿಂಡಿ, ಹುಲ್ಲು ಇತ್ಯಾದಿಗಳ ಬೆಲೆಗಳೂ ಶೇ. 100ಕ್ಕೂ ಮಿಕ್ಕಿ ಏರುತ್ತಿದ್ದರೂ, ಲೀಟರ್ ಹಾಲಿಗೆ ಕೇವಲ 50 ಪೈಸೆ ಹೆಚ್ಚಾದರೂ ರಾಜ್ಯಾದ್ಯಂತ ಗಲಾಟೆ ಎಬ್ಬಿಸುವ ರಾಜಕೀಯ ಪಕ್ಷಗಳು, ಪುಡಾರಿಗಳು, ಗ್ರಾಹಕರು ಮತ್ತು ಪತ್ರಿಕೆಗಳು, ಅದೇ ಸಾವಿರಾರು ರೈತರು ತಾವು ಕೊಡುವ ಹಾಲಿಗೆ 3 ರೂ.ಗಳನ್ನೂ ಪಡೆಯಲಾರದೆ ಸೊರಗುತ್ತಿರುವಾಗ, ಸಹಕಾರ ಸಂಘಗಳನ್ನು ದಿಢೀರನೆ ಮುಚ್ಚಿ ಹಾಲು ಉತ್ಪಾದಕರ ಬೆನ್ನು ಮುರಿಯುವಾಗ ಎಲ್ಲ ಎಲ್ಲಿರುತ್ತಾರೋ ?

2) ಒಂದು ಕಡೆ ಮಂತ್ರಿಗಳು, ಅಧಿಕಾರಿಗಳು ಹಾಲಿನ ಬಗ್ಗೆ 'ಆಪರೇಶನ್ ಫ್ಲಡ್' ಇತ್ಯಾದಿ ಬುರುಡೆ ಹೊಡೆಯುತ್ತ ಹಾಲು ಉತ್ಪಾದನೆಯನ್ನು 1990ರ ವೇಳೆಗೆ 25 ಲಕ್ಷ ಲೀಟರಿಗೂ ಮಿಕ್ಕಿ ಮಾಡುತ್ತೇವೆ ಮುಂತಾಗಿ ಕಂಬಿಯಿಲ್ಲದೆಯೇ ರೈಲು ಬಿಡುತ್ತಿದ್ದರೆ, ಹಾಸನ ಮುಂತಾದ ಡೈರಿಗಳವರು ಪ್ರತಿ ವರ್ಷ ಹಾಲು ಸಂಗ್ರಹಣೆ ತಮ್ಮ ನಿರೀಕ್ಷೆಗೂ ಮೀರಿ ಹೆಚ್ಚುತ್ತಿರುವುದಕ್ಕೆ ಸರಿಯಾಗಿ ಬೇರೆ ಉತ್ಪನ್ನಗಳ ತಯಾರಿಕೆಗೆ ವ್ಯವಸ್ಥೆ ಮಾಡದಿರುವುದು, ಕೆಲವು ಕಡೆಗಳ ಹಾಲು ಸಂಗ್ರಹಣೆ ನಿಲ್ಲಿಸುತ್ತಿರುವುದು, ಗುಟ್ಟಾಗಿ ಹೆಚ್ಚುವರಿ ಹಾಲನ್ನು ಒಳ ಚರಂಡಿಗೆ ಹರಿಯಬಿಡುವುದು— ಇತ್ಯಾದಿ ನಡೆದೇ ಇದೆ.

3) ಹಾಸನ ಡೈರಿ ಕೆಲವು ಸೊಸೈಟಿಗಳಿಂದ ಹಾಲು ಸಂಗ್ರಹಣೆ ನಿಲ್ಲಿಸಿ ತಿಂಗಳುಗಳೇ ಸಂದಿದ್ದರೂ ಇನ್ನೂ ಬಾಕಿ ಹಣ ಪಾವತಿಗೆ ಏರ್ಪಾಡು ಮಾಡದ, 5-6 ರಿಜಿಸ್ಟರ್ಡ್ ಪತ್ರ ಕಳಿಸಿದರೂ ಉತ್ತರಿಸುವ ಸೌಜನ್ಯವನ್ನೂ ತೋರದ ಅಲ್ಲಿನ ಕೆಲವು ಕೊಬ್ಬಿದ ಅಧಿಕಾರಿಗಳು, ಈ ಹಿಂದಿನ ವರದಿಯಲ್ಲಿ ಬಾಳೆಹೊನ್ನೂರು ಶೀತಲೀಕರಣ ಕೇಂದ್ರದಲ್ಲಿ ಯಾಂತ್ರಿಕ ತೊಂದರೆಯಿಂದಾಗಿ ಹಾಲು ಸಂಗ್ರಹಣೆ ನಿಲ್ಲಿಸಿರುವುದಾಗಿ ಹೇಳಿಕೊಂಡಿದ್ದವರು. 6.3.88ರ ನಿಮ್ಮ ಸಂಚಿಕೆಯ ಅನ್ವಯ ಮಂತ್ರಿಗಳಿಗೆ ನೀಡಿರುವ ಸಮಜಾಯಿಷಿ ಪ್ರಕಾರ 300 ಲೀ. ಹಾಲು ಬರುತ್ತಿದ್ದು ತಮ್ಮಲ್ಲಿ ತಕ್ಕ ವ್ಯವಸ್ಥೆಯಿಲ್ಲದಿರುವುದು ಹಾಗೂ ಹಾಲು ಶೇಖರಣೆ-ಸಾಗಣೆಗಾಗಿ ಪ್ರತಿ ಲೀ.ಗೆ ರೂ. 3 80ರಂತೆ ತಿಂಗಳಿಗೆ ಒಂದು-ಒಂದೂವರೆ ಲಕ್ಷ ರೂ. ನಷ್ಟ ಸಂಭವಿಸುತ್ತಿರುವುದು ಹಾಲು ಸಂಗ್ರಹಣೆಯ ನಿಲುಗಡೆಗೆ ಕಾರಣ ಎಂದು ಹೇಳಿಕೊಂಡಿದ್ದಾರೆ. ಹೀಗೆ ಸಮಯಕ್ಕೊಂದು ಸುಳ್ಳು ಹೊಡೆಯುವುದರಲ್ಲೂ ಅವರು ಎಷ್ಟು ಎಚ್ಚರ ತಪ್ಪಿದ್ದಾರೆಂಬುದಕ್ಕೆ, ಈ ಲೆಕ್ಕಾಚಾರ ನೋಡಿ.

1ಲೀ.ಗೆ 3.80 ರಂತೆ 300ಲೀ.ಗೆ ಸಾಗಣೆ ಖರ್ಚು ದಿನವೊಂದಕ್ಕೆ 1040 ರೂ.;

ಆ 300ಲೀ. ಪೂರ್ತಿ ಒಡೆದು ಹೋಗಿ, ಅದಕ್ಕೂ ಅವರು ಹಣ ಕೊಟ್ಟಿದ್ದರೂ ಲೀ.ಗೆ 3.00 ಯಂತೆ (ಸರಿಯಾದ ಹಾಲಿಗೇ ಹಣ ಖೋತಾ ಮಾಡಿದ್ದಾರೆ ಹೊರತು ಒಡೆದ ಹಾಲಿಗೆ ಎಂದೂ ಹಣ ಕೊಟ್ಟಿಲ್ಲ. ಆದಾಗ್ಯೂ) —ರೂ. 900-00; ತಿಂಗಳಿಗೆ 61,200 ರೂ.; ಸಿಬ್ಬಂದಿ ವೇತನ ತಿಂಗಳಿಗೆ 5,000 ರೂ.; ಒಟ್ಟು ತಿಂಗಳಿಗೆ ಖರ್ಚು 66,200 ರೂ. ಆಯಿತು. ಇದು

(3ನೇ ಪುಟಕ್ಕೆ)

—ಎಂ. ಆರ್. ಕಣ್ಣನ್
ಕೊಪ್ಪ.




## ನನ್ನ ಅಮ್ಮ

ನನ್ನ ಅಮ್ಮ
ಬಲೂ
ಜಾಣಳು !
ನಸುಕಿನಲೇ
ಎದ್ದು ನನ್ನ
ಎಬ್ಬಿಸಿ ಬಿಡುವಳು !
ಮುಖ ತೊಳೆದ
ಮೇಲೆ ನನಗೆ
ಹಾಲು ಕೊಡುವಳು
ಸ್ನಾನ ಮಾಡಿಸಿ
ನನಗೆ ಪಾಠ
ಹೇಳಿಕೊಡುವಳು !
ಬಟ್ಟೆ ತೊಡಿಸಿ
ತಲೆಯ ಬಾಚಿ
ಶಾಲೆಗೆ ಕಳಿಸಿ ಬರುವಳು !
ನನಗಾಗಿ ನನ್ನ
ಅಮ್ಮ ಎಷ್ಟು
ಕಷ್ಟ ಪಡುವಳು !
ನಾನು ಕೊಂಚ
ನೊಂದರು ಕೂಡ
ಅವಳು ಸಹಿಸಳು !
ನಾನು ಅತ್ತರೆ
ಅವಳೂ ಕೂಡ
ಅತ್ತು ಬಿಡುವಳು !
ಇಂಥ ಅಮ್ಮನನ್ನು
ಪಡೆದ ನಾನೇ
ಧನ್ಯನು !
ಅದಕೇ ನಾನು
ನನ್ನಮ್ಮನನ್ನು
ಎಂದೂ ಮರೆಯೆನು !!

—ಚಾವಲ್ಮನೆ ಸುರೇಶ್ ನಾಯಕ್.

# ಪ್ರಾಣ ಸ್ನೇಹಿತರ ಎರಡು ಕಥೆಗಳು

## 2. ಗೆಳೆಯನ ರಕ್ಷಣೆಗೆ ಪ್ರಾಣವೇ ಪಣ

(ಹಿಂದಿನ ಸಂಚಿಕೆಯಲ್ಲಿ: ಪಾರಿವಾಳಗಳ ರಾಜ ಮತ್ತು ಇಲಿಯ ಅಪೂರ್ವವಾದ ಸ್ನೇಹವನ್ನು ಕಂಡ ಕಾಗೆ ತಾನೂ ಆ ಇಲಿಯ ಸ್ನೇಹವನ್ನು ಸಂಪಾದಿಸಿಕೊಂಡಿತು. ಅವು ಸಂತೋಷದಿಂದಿದ್ದವು.)

ಕೆಲವು ಕಾಲ ಕಳೆಯುವಾಗ ಕಾಗೆಗೆ ಆ ಕಾಡಿನಲ್ಲಿ ಆಹಾರ ಸಾಲದಾಗುತ್ತ ಬಂತು. ಅದು ತನ್ನ ಇನ್ನೊಬ್ಬ ಆಪ್ತ ಮಿತ್ರ ಆಮೆಯಿರುವ ಕಾಡಿಗೆ ಹೋಗುತ್ತೇನೆಂದಾಗ ಅದನ್ನು ಬಿಟ್ಟು ಇರಲಾರದೆ ಇಲಿಯೂ ಹೊರಟಿತು. ಅಲ್ಲಿ ಆಮೆ ಅವರಿಬ್ಬರನ್ನೂ ಸಂತೋಷದಿಂದ ಸ್ವಾಗತಿಸಿತು.

ಮೂವರೂ ಸಂತೋಷದಿಂದ ಇರುವಾಗ ಒಂದು ದಿನ ಬೇಟೆಗಾರನಿಂದ ತಪ್ಪಿಸಿಕೊಂಡು ಒಂದು ಜಿಂಕೆ ಅವರಿದ್ದಲ್ಲಿಗೆ ಓಡುತ್ತ ಬಂತು. ಅದಕ್ಕೆ ಸ್ವಲ್ಪ ಆಹಾರ ಕೊಟ್ಟು, ದಣಿವಾರಿಸಿಕೊಳ್ಳಲು ಹೇಳಿ ಆಮೆ ಮಿಂದು ಬರಲು ಹತ್ತಿರದ ಹೊಳೆಗೆ ಹೋಯಿತು. ಅಷ್ಟರಲ್ಲಿ ಅಲ್ಲಿಗೆ ಬಂದ ಬೇಟೆಗಾರ ಅದನ್ನು ಹಿಡಿದುಕೊಂಡು ಬಿಟ್ಟ.

'ಕಾಪಾಡಿ, ಕಾಪಾಡಿ!' ಎಂಬ ಆಮೆಯ ಆರ್ತನಾದ ಕೇಳಿ ಅದರ ಗೆಳೆಯರು ಚಿಂತಿತರಾದರು. ಆಗ ಜಾಣ ಇಲಿ ಆಮೆಯನ್ನು ರಕ್ಷಿಸಲು ತನ್ನ ಗೆಳೆಯರಿಗೆ ಒಂದು ಉಪಾಯ ಹೇಳಿಕೊಟ್ಟು ತಾನು ಅಡಗಿ ಕುಳಿತಿತು.

ಬೇಟೆಗಾರ ಅತ್ತ ಬರುವಾಗ ಜಿಂಕೆ ದಾರಿಯಲ್ಲಿ ಸತ್ತಂತೆ ಬಿದ್ದಿತ್ತು. ಕಾಗೆ ಅದನ್ನು ಕುಕ್ಕುತ್ತಿರುವಂತೆ ನಟಿಸುತ್ತಿತ್ತು. ಇದನ್ನು ಕಂಡ ಬೇಟೆಗಾರ ಆಮೆಯನ್ನು ಅಲ್ಲೇ ಇಟ್ಟು ಜಿಂಕೆಯನ್ನು ಹಿಡಿದುಕೊಳ್ಳಲು ಹೋದ. ಕೂಡಲೇ ಇಲಿ ಆಮೆಯ ಕೈಕಾಲಿನ ಕಟ್ಟುಗಳನ್ನು ಕಡಿದು ಹಾಕಿತು. ಆಮೆ ಹೊಳೆಗೆ ಧುಮುಕಿ ತಪ್ಪಿಸಿಕೊಂಡಿತು.

ಅತ್ತ, ಬೇಟೆಗಾರ ಹತ್ತಿರ ಬರುತ್ತಲೇ ಜಿಂಕೆ ತಟ್ಟನೆದ್ದು ಓಡಿಹೋಯಿತು. ಕಂಗಾಲಾದ ಬೇಡ, "ಜಿಂಕೆ ಹೋದರೆ ಹೋಗಲಿ. ಆಮೆಯಾದರೂ ಇದೆಯಲ್ಲ" ಎಂದು ಬಂದು ನೋಡಿದರೆ ಅದೂ ತಪ್ಪಿಸಿಕೊಂಡಿತ್ತು. ಅವನು ತನ್ನ ದುರಾಸೆಗೆ ಪಶ್ಚಾತ್ತಾಪಪಡುತ್ತ ಹೊರಟು ಹೋದ.

ಪುನಃ ಮಿತ್ರರೆಲ್ಲ ಒಂದಾಗಿ ಸುರಕ್ಷಿತವಾದ ಬೇರೊಂದು ಜಾಗವನ್ನು ಸೇರಿಕೊಂಡರು. ಅಪಾಯಕ್ಕೆ ಸಿಕ್ಕಿದ್ದ ತನ್ನನ್ನು ರಕ್ಷಿಸಲು ಉಪಾಯ ಹುಡುಕಿದ ಇಲಿಯನ್ನೂ, ತಮ್ಮ ಪ್ರಾಣವನ್ನೇ ಪಣವಾಗಿಟ್ಟ ಈ ಗೆಳೆಯರನ್ನೂ ಆಮೆ ಕೊಂಡಾಡಿತು.

## ಸೂಕ್ತಿಗಳು

1. ಒಳ್ಳೆಯ ಗೆಳೆತನ ಮಾಡಿದವನು ಎಂದೆಂದೂ ಸಂತೋಷವಾಗಿರುತ್ತಾನೆ.

2. ಕೆಟ್ಟ ಗೆಳೆಯನಾದರೆ ಅವನ ದಾರಿಗೆ ನಾವು ಹೋಗದೆ, ನಮ್ಮ ದಾರಿಗೆ ಅವನನ್ನು ತರಬೇಕು.

ಸಂಗ್ರಹ : **ಸಂತೋಷ್ ಕುಮಾರ್,**
5ನೇ ತರಗತಿ, ಲೋಕನಾಥಪುರ

## ಕನ್ನಡದ ಕೀರ್ತಿ

ಕನ್ನಡ ಚಂದ ಕನ್ನಡ ಅಂದ
ಕನ್ನಡ ನಾಡೇ ಪರಮಾನಂದ
ಕನ್ನಡ ಕೀರ್ತಿಗೆ ಸರಿಸಾಟಿ ಇಲ್ಲ
ಕನ್ನಡದಿಂಪೆ ತುಂಬಿದೆ ಎಲ್ಲ
ಕಾವೇರಿ ಹರಿವ ಕನ್ನಡನಾಡು
ಬೇಲೂರು ಹಳೆಬೀಡು ಇರುವಂಥ ನಾಡು
ಚಾಮುಂಡಿ ಇರುವ ಮೈಸೂರು
ನಮ್ಮ ಜಿಲ್ಲೆ ಚಿಕ್ಕಮಗಳೂರು

—**ಬಿ. ರಾಜೀವ**
6ನೇ ತರಗತಿ, ಕೊಪ್ಪ

## 6.3.88ರ 'ಚಿನಾರಿಕೂಟ'ದ ಒಗಟುಗಳಿಗೆ ಉತ್ತರಗಳು

1. ಕಿವಿ, 2. ತೆಂಗಿನ ಕಾಯಿ, 3. ಚಂದ್ರ-ನಕ್ಷತ್ರ, 4. ಬೀಸುವ ಕಲ್ಲು (ಕಲ್ಲು ತಿರುಗುತ್ತೆ, ಹಿಟ್ಟು ಬೀಳುತ್ತೆ), 5. ಹೂಟಿ ಮಾಡುವುದು (ಎತ್ತುಗಳ ಎರಡು ತಲೆ, ಹೂಡುವ ಮನುಷ್ಯನ ಒಂದು ತಲೆ; ಒಟ್ಟು ಮೂರು ತಲೆ; ಎತ್ತುಗಳ 8+ ಮನುಷ್ಯನ 2, ಒಟ್ಟು 10 ಕಾಲು); 6. ಹಾಲು ಕರೆಯುವುದು, 7. ಹಾಲು, ಮಜ್ಜಿಗೆ, ಮೊಸರು, ಬೆಣ್ಣೆ, ತುಪ್ಪ; 8. ಮಲ್ಲಿಗೆ ಹೂವು.

ಪ್ರೀತಿಯ ಚಿನಾರಿಗಳೆ,

'ಸ್ಪರ್ಧೆಗೊಂದು ಸ್ಪರ್ಧೆ!' ಆಹ್ವಾನಕ್ಕೆ ಯಾಕೆ ಯಾರೂ ಏನನ್ನೂ ಕಳಿಸಿಲ್ಲವಲ್ಲ? ಏನೂ ಹೊಳೆಯಲಿಲ್ಲವೆ ? ಅಥವಾ ಪರೀಕ್ಷೆಗಳು, ಅದರ ನಂತರದ ನೆಂಟರ ಮನೆಯ ಪ್ರವಾಸಗಳು—ಇವುಗಳ ನಡುವೆ ಬಿಡುವಾಗಲಿಲ್ಲವೆ ? ಅಥವಾ ಪ್ರಶ್ನೆ ಏನೆಂದು ಅರ್ಥವಾಗಲಿಲ್ಲವೆ ?

ಹಾಗಾದರೆ ಆ ಸ್ಪರ್ಧೆಯನ್ನು ಇನ್ನೂ ಸ್ವಲ್ಪ ಕಾಲ ಮುಂದುವರಿಸೋಣವೆ ? ಈ ತಿಂಗಳ 25ರೊಳಗಾಗಿ (25-4-1988) ನಿಮ್ಮ ಪ್ರವೇಶಗಳನ್ನು ತಪ್ಪದೇ ಕಳಿಸಿ. ಪ್ರಶ್ನೆ ಅರ್ಥವಾಗಲ್ಲವಾದರೆ ಹಿರಿಯರನ್ನು ಕೇಳಿ ಅರ್ಥ ಮಾಡಿಕೊಳ್ಳಿ.

ಸದ್ಯಕ್ಕೆ ನಾವೇ ಒಂದು ಸ್ಪರ್ಧೆ ಕೊಡುತ್ತೇವೆ.

ಮಳೆಗಾಲ ಆರಂಭವಾಗುವುದಕ್ಕೆ ಮೊದಲು ಆಕಾಶದಲ್ಲಿ ಮೋಡಗಳು ತೇಲಿ ಬರತೊಡಗುತ್ತವಲ್ಲ, ಅದನ್ನು ನೋಡಿ ಕಾಡಿನಲ್ಲಿ ನವಿಲುಗಳು ಕೇಕೆ ಹಾಕಿ ಸ್ವಚ್ಛಂದವಾಗಿ ನಲಿದು ನರ್ತಿಸುತ್ತವಂತೆ. ಕೇಳಿದ್ದೀರಲ್ಲವೆ ?

ಇದು ಏಕಿರಬಹುದು ? ಇದಕ್ಕೊಂದು ಕತೆಯನ್ನು ನೀವೇ ಕಲ್ಪನೆ ಮಾಡಿ ಬರೆದು 25-4-88ರೊಳಗೆ ನಮಗೆ ತಲುಪುವಂತೆ ಕಳಿಸಬೇಕು. ಎರಡು ಬಹುಮಾನಗಳಿವೆ. ಬೇಗ !

—**ಸಿರಿಮನೆ ನಾಗರಾಜ್,**

ಓದುಗರ ಪತ್ರಗಳು

# ಫೀನಾಯಲ್ ಘಟಕ: ಮುಂಜಾಗ್ರತೆಯಾದರೂ ಅಗತ್ಯ

ಮಾನ್ಯರೆ,

ಫೀನಾಯಿಲ್ ಘಟಕದ ಕಟ್ಟಡಕ್ಕೆ ನಿವಾಸಿಗಳ ವಿರೋಧ ಕುರಿತು 3.4.88ರ ಸಂಚಿಕೆಯಲ್ಲಿ ಮುಂ. ಪಂ. ಸದಸ್ಯ ಶ್ರೀ ಜಿ. ಎಸ್. ಶ್ರೀನಿವಾಸ್ ನೀಡಿರುವ ಅಭಿಪ್ರಾಯಕ್ಕೆ ಒಂದು ಪ್ರತಿಕ್ರಿಯೆ.

ಈ ಘಟಕ ದಟ್ಟ ಜನವಸತಿಯ ಪ್ರದೇಶದಲ್ಲಿದ್ದರೂ ಅದರಿಂದ ಸುತ್ತಮುತ್ತಲಿನವರ ಆರೋಗ್ಯಕ್ಕೇನೂ ಧಕ್ಕೆಯಿಲ್ಲವೆಂದು ಸ್ಥಳಕ್ಕೆ ಭೇಟಿ ಕೊಟ್ಟಿದ್ದ ಜಿಲ್ಲಾ ಆರೋಗ್ಯಾಧಿಕಾರಿಗಳು ಬಾಯಿ ಮಾತಿನಲ್ಲಿ ಹೇಳಿದರೇ ಹೊರತು ಅಧಿಕೃತವಾಗಿ ಬರವಣಿಗೆಯಲ್ಲಿ ಕೊಡಲು ಒಪ್ಪಿಲ್ಲ.

ಅಷ್ಟೇ ಅಲ್ಲ, ಫೀನಾಯಿಲ್‌ನ್ನು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸುವಾಗ ಅದರಿಂದ ಬರುವ ಹೊಗೆ, ಅದರಲ್ಲಿ ಉಳಿವ ಮಡ್ಡಿ, ಅದಕ್ಕಾಗಿ ಬಳಸುವ ಕಾಸ್ಟಿಕ್ ಸೋಡ, ಕಾರ್ಬಾಲಿಕ್ ಆ್ಯಸಿಡ್ ಮುಂತಾದವುಗಳ ಸುರಕ್ಷಿತ ಶೇಖರಣೆ— ಇವುಗಳ ಬಗ್ಗೆ ಸೂಕ್ತ ಏರ್ಪಾಡಿನ ಜವಾಬ್ದಾರಿ ಹೊರಬೇಕು ಎಂದು ಡಿಎಚ್‌ಒರವರೇ ಒತ್ತಿ ಹೇಳಿದ್ದಾರೆ.

ರಾಸಾಯನಿಕ ಘಟಕವೊಂದು ಸಾಮಾನ್ಯವಾಗಿ ಜನವಸತಿಯಿಂದ ಆದಷ್ಟು ಹೊರಗಿರಬೇಕು ಎಂಬುದು ಒಂದು ಸರ್ವೇಸಾಮಾನ್ಯ ತಿಳುವಳಿಕೆ. ಹಾಗೆ ಮಾಡಲು ಸೂಕ್ತ ಸರ್ಕಾರಿ ಜಾಗ ಇಲ್ಲದಿದ್ದರೆ ಹಾಗೂ ಒಂದು ವೇಳೆ ಅದರಿಂದ ಸಾರ್ವಜನಿಕರ ಆರೋಗ್ಯಕ್ಕೆ ಯಾವ ಧಕ್ಕೆಯೂ ಖಂಡಿತ ಇಲ್ಲವಾದರೆ ಆ ರೀತಿ ಡಿಎಚ್‌ಒರವರಿಂದ ಅಧಿಕೃತ ಪ್ರಮಾಣ ಪತ್ರ ಹಾಗೂ ಅವರು ತಿಳಿಸಿದಂಥ ಎಚ್ಚರಿಕೆಯ ಕ್ರಮಗಳ ಬಗ್ಗೆ ತಕ್ಕ ಒಪ್ಪಿಗೆ ಪತ್ರ—ಇವನ್ನಾದರೂ ಸಂಬಂಧಪಟ್ಟವರು ನಾಗರಿಕ ಸಮಿತಿಗೆ ನೀಡಬೇಕೆಂದೂ ಮತ್ತು ಆ ರೀತಿಯಲ್ಲೇ ಎಲ್ಲ ಮುಂಜಾಗ್ರತಾ ಕ್ರಮಗಳನ್ನೂ ಅನುಸರಿಸಬೇಕೆಂದೂ ನಿವಾಸಿಗಳ ಪರವಾಗಿ ಒತ್ತಾಯಿಸುತ್ತೇನೆ.

—ಎಚ್.ಆರ್. ಸಂಜೀವ,
ಪ್ರ| ಕಾರ್ಯದರ್ಶಿ,
ರಾಘವೇಂದ್ರ ನಗರ ನಾಗರಿಕ ಹೋರಾಟ ಸಮಿತಿ, (ಎ.ಐ.ಕೆ.ಎಸ್.), ಕೊಪ್ಪ

# ಸಂಬಂಧಪಟ್ಟವರ ಗಮನಕ್ಕೆ 2 ಸಮಸ್ಯೆಗಳು

## 1. ಬಡ್ಡಿಯ ಕಂತಿಗೂ ರಿಯಾಯ್ತಿಗಳು ಲಭಿಸಲಿ

ಮಾನ್ಯರೆ,

ರೈತರು ಭೂ ಅಭಿವೃದ್ಧಿ ಬ್ಯಾಂಕ್‌ನಿಂದ ಪಡೆದ ಸಾಲಗಳಿಗೆ ರಿಯಾಯ್ತಿ ಬಡ್ಡಿ ಹಾಗೂ ಚಾಲ್ತಿ ಸಾಲಿಗೆ ಬಡ್ಡಿ ಮನ್ನಾ ಮಾಡಿರುವುದು ಈ ದುರ್ಭರ ಸಂದರ್ಭದಲ್ಲಿ ರೈತರಿಗೆ ಸಾಕಷ್ಟು ಪ್ರಯೋಜನವನ್ನೂ ಕೃಷಿ ಅಭಿವೃದ್ಧಿಗೆ ಉತ್ತೇಜನವನ್ನೂ ನೀಡಿದೆ. ಬಹಳಷ್ಟು ರೈತರು ಇದರಿಂದ ನಿರೀಕ್ಷಿತ ಪ್ರಯೋಜನವನ್ನೂ ಪಡೆದಿದ್ದಾರೆ.

ಆದರೆ ಸಾಲ ನೀಡಿದ ಮೊದಲ ವರ್ಷ ಬರಿಯ ಬಡ್ಡಿಯ ಕಂತನ್ನು ಮಾತ್ರ ವಸೂಲು ಮಾಡುತ್ತಾರಲ್ಲ, ಆ ಕಂತಿಗೆ ಈ ರಿಯಾಯ್ತಿಗಳು ಅನ್ವಯಿಸುತ್ತಿಲ್ಲ, ಇದೇಕೆ? ಸಂಬಂಧಪಟ್ಟವರು ಕೂಡಲೇ ಗಮನ ಹರಿಸಿ, ಬಡ್ಡಿಯ ಕಂತಿಗೆ ಕೂಡ ಉದ್ದೇಶದ ಲಾಭ ದೊರಕಿಸಲಿ

## 2. 'ಹೋಬಳಿ ಡೇ' ಬೇಕು

ಕೊಪ್ಪ ತಾಲ್ಲೂಕಿನ ಕಸಬಾ ಮತ್ತು ಹರಿಹರಪುರ ಹೋಬಳಿಗಳಲ್ಲಿ ಈಚೆಗೆ ಕೆಲವು ತಿಂಗಳಿಂದ ಕೊರತೆಯ ಸಮಸ್ಯೆಯಿಂದಾಗಿ ಹೋಬಳಿ ಡೇ ನಡೆಯುತ್ತಿಲ್ಲ. ಇದರಿಂದ ಪಹಣಿ ವಗೈರೆ ಪಡೆಯಲು ರೈತರು ತಾ|| ಕಛೇರಿಗೇ ಹೋಗಬೇಕಾಗಿ ಬಹಳ ತೊಂದರೆಯಾಗಿದೆ. ತಾ|| ಕಛೇರಿಯಲ್ಲಿ ವಿಪರೀತ ಜನಜಂಗುಳಿ; ಅಧಿಕಾರಿಗಳಿಗೂ ಕೆಲಸದ ಹೊರೆ. ರೈತರಿಗೂ 2–3 ದಿನದ ತಿರುಗಾಟ. ಅದರಲ್ಲೂ ರೈತರಿಗೆ ದಾಖಲಾತಿಗಳ ಅವಶ್ಯಕತೆ ಅತ್ಯಂತ ಹೆಚ್ಚಿರುವ ಈ ಮಾರ್ಚ್–ಏಪ್ರಿಲ್ ತಿಂಗಳುಗಳಲ್ಲಿ, ಕೊಪ್ಪ ತಾ|| ಕಛೇರಿಯಲ್ಲಿ ಹಿಂದೆ 1 ದಿನದಲ್ಲಾಗುತ್ತಿದ್ದ ಕೆಲಸಕ್ಕೆ ಈಗ 2–3 ದಿನಕ್ಕೆ ಕಡಿಮೆ ಆಗುವುದಿಲ್ಲ

ಸಂಬಂಧಪಟ್ಟವರು ಹಿಂದಿನಂತೆಯೇ 'ಹೋಬಳಿ ದಿನ' ನಡೆಸಿದರೆ ರೈತರು ಮತ್ತು ಅಧಿಕಾರಿಗಳಿಬ್ಬರಿಗೂ ಅನುಕೂಲ.

ಹೊಸ್ಮನೆ ರಮೇಶ್,
ಗಡಿಕಲ್ಲು.

## ನವೋದಯ ಶಾಲೆಯ ಪ್ರವೇಶ ಪರೀಕ್ಷೆಗೆ ತರಬೇತಿ ಶಿಬಿರ

ನವೋದಯ ಶಾಲೆಯ ಪ್ರವೇಶ ಪರೀಕ್ಷೆಗೆ ಕುಳಿತುಕೊಳ್ಳುವ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಶೃಂಗೇರಿ ಜೇಸೀಸ್ ಸಂಸ್ಥೆಯು ಮೇ ತಿಂಗಳ ದಿನಾಂಕ 7, 8, ಮತ್ತು 9 ರಂದು ಶೃಂಗೇರಿಯ ಸರ್ಕಾರಿ ಹಿರಿಯ ಪ್ರಾಥಮಿಕ ಬಾಲಕಿಯರ ಪಾಠ ಶಾಲೆಯಲ್ಲಿ ಪ್ರತಿ ದಿನ ಬೆಳಿಗ್ಗೆ 10 ರಿಂದ ಸಾಯಂಕಾಲ 4–30 ಗಂಟೆಯವರೆಗೆ ಉಚಿತ ತರಬೇತಿ ಶಿಬಿರವನ್ನು ಏರ್ಪಡಿಸಿದ್ದು, ಸಂಬಂಧಪಟ್ಟ ಪೋಷಕರು ತಮ್ಮ ಮಕ್ಕಳು ಈ ಶಿಬಿರದಲ್ಲಿ ಭಾಗವಹಿಸುವಂತೆ ಉತ್ತೇಜನ ಕೊಟ್ಟು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬೇಕಾಗಿ ಕೋರಲಾಗಿದೆ. ಮಕ್ಕಳಿಗೆ ಈ ಶಿಬಿರಕ್ಕೆ ಬಂದು ಹೋಗುವ ಖರ್ಚನ್ನು ಮತ್ತು ಊಟದ ಖರ್ಚನ್ನು ಪೋಷಕರೇ ಭರಿಸಬೇಕಾಗಿ ವಿನಂತಿಸಲಾಗಿದೆ.

('ಶೃಂಕೊನ'ದಿಂದ)

# ಜಿಲ್ಲಾ ಪರಿಷತ್ ಅಧ್ಯಕ್ಷತೆ: ಮಿಾಗಾ ಪ್ರತಿಕ್ರಿಯೆ

(1ನೇ ಪುಟದಿಂದ)

ಇನ್ನು, ಅಭಿವೃದ್ಧಿ ಕಾರ್ಯಗಳಲ್ಲಾಗಲಿ, ಜನ ಕಲ್ಯಾಣ ಯೋಜನೆಗಳಲ್ಲಾಗಲಿ ಇವರ ಕಳಕಳಿ, ಜಾಣ್ಮೆ, ದಕ್ಷತೆ ವ್ಯಕ್ತವಾದ ಸಂದರ್ಭಗಳಿಗಿಂತ ಅದರ ತದ್ವಿರುದ್ಧವೇ ಎದ್ದು ಕಾಣುತ್ತದೆ. ನೆಮ್ಮಾರಿನ ಗ್ರಾಮೀಣ ಬ್ಯಾಂಕ್ ಮ್ಯಾನೇಜರ್ ಮಣ್ಣುಗೂಡಿಸಿದ ಅಲ್ಲಿನ ಸುಸಜ್ಜಿತ ದ್ವಾಕ್ರಾ ಘಟಕವನ್ನು ಈವರೆಗೂ ಮೇಲೆತ್ತಲಾರದೆ ಹೋದದ್ದು, ಅಷ್ಟೇ ಉತ್ತಮವಾಗಿ ನಡೆಯುತ್ತಿದ್ದ ಅಸಗೋಡಿನ ದ್ವಾಕ್ರಾ ಘಟಕದ ಒಂದೂವರೆ ಲಕ್ಷ ರೂ. ಅಂದಾಜು ವೆಚ್ಚದ ಕಟ್ಟಡಕ್ಕೆ ತಾನೇ ಶಂಕುಸ್ಥಾಪನೆ ಮಾಡಿ, ಯಃಕಶ್ಚಿತ್ ಒಬ್ಬ ವಿಘ್ನ ಸಂತೋಷಿ ಜಿ. ಪ. ಸದಸ್ಯೆಯ ಅಡ್ಡಗಾಲಿಗೆ ಮಣಿದು ಆ ಕಟ್ಟಡ ಕಟ್ಟಿಸಲಾಗದೆ ಸೋತದ್ದು, (ಅಂತೂ ಆ ಫಲಾನುಭವಿಗಳ ಎಡೆಬಿಡದ ಹೋರಾಟದಿಂದ ಆ ಕಟ್ಟಡಕ್ಕಾಗಿ ಈ ವರ್ಷ ಒಂದು 50 ಸಾವಿರ ರೂ. ಮಂಜೂರಾಗಿದೆ) —ಇವು ಇವರ ವೈಫಲ್ಯದ ಕೇವಲ ಒಂದೆರಡು ಸ್ಯಾಂಪಲ್‌ಗಳೇನೋ; ನಮ್ಮ ಕಣ್ಣೆದುರೇ ಇರುವಂಥವು.

ಇಷ್ಟೆಲ್ಲ 'ಸಾಧನೆ'ಗಳಿಂದಾಗಿ, ತಾನೇ ಅಧ್ಯಕ್ಷನಾಗಿ ಮುಂದುವರಿಯಬೇಕೆಂಬ ಇವರ ಕೋರಿಕೆಗೆ ಮುಖ್ಯಮಂತ್ರಿ ಹೆಗಡೆಯಾಗಾಯ್ತು ರಾಜ್ಯ ನಾಯಕತ್ವದ ಯಾರೂ ಬೆಂಬಲ ಕೊಟ್ಟಿಲ್ಲ ಎನ್ನಲಾಗಿದೆ.

ಹೀಗೆ ಅಧ್ಯಕ್ಷ ಗಾದಿ ಕೈ ಬದಲಾಗುವುದು ಬಹುಪಾಲು ಖಚಿತವಾಗಿರುವುದರಿಂದ ಈಗ ಪುನಃ ಬಯಲುಸೀಮೆ — ಮಲೆನಾಡು 'ಲಾಬಿಯಿಂಗ್' ಚಿಗುರೊಡೆದಿದೆ.

ಅಂದಿನ ಒಡಂಬಡಿಕೆಯಂತೆ ಈ ವರ್ಷ ಅಧ್ಯಕ್ಷರಾಗಬೇಕಾಗಿರುವುದು ಜಿಲ್ಲೆಯ ಜನತಾ ಪಕ್ಷದ ಅತ್ಯಂತ ಹಳೆಯ ಮುಖಂಡರಲ್ಲೊಬ್ಬರೂ, ಶುದ್ಧ ಹಸ್ತರೆನಿಸಿಕೊಂಡಿರುವವರೂ ಆದ ಮಿಾಗ ಚಂದ್ರಶೇಖರ್ ಎನ್ನಲಾಗಿದೆ. ಜೊತೆಗೆ ಇನ್ನೊಬ್ಬ ಆಸಕ್ತರೆಂದರೆ ಎಸ್. ವಿ. ಮಂಜುನಾಥ್. ಬಿ ಎಲ್. ಸುಬ್ಬಮ್ಮನವರ ಹೆಸರೂ 'ಸೀನಿಯಾರಿಟಿ' ಯಲ್ಲಿದೆ.

ಆದರೆ ಮಿಾಗ ಅಧ್ಯಕ್ಷರಾಗುವುದಾದರೆ ಎಸ್.ವಿ. ಕಾಯಲು ಸಿದ್ಧರೆಂದೂ, ಸುಬ್ಬಮ್ಮ ಸ್ವತಃ ಅವಕಾಶ ಬಿಟ್ಟುಕೊಡುವುದಾಗಿ ಆಲಾಯದಾ ತಿಳಿಸಿದ್ದಾರೆಂದೂ ಹೇಳಲಾಗಿದೆ. ಆದರೆ ಬಯಲುಸೀಮೆ ಹಾಗೂ 'ಒಕ್ಕಲಿಗೇತರರ' ಪೈಪೋಟಿ ಮಾತ್ರ ಮುಗಿದಂತಿಲ್ಲ.

ಈ ಹಿನ್ನೆಲೆಯಲ್ಲಿ ಮಿಾಗ ಅವರನ್ನು ಈಚೆಗೆ 'ಮುಂಜಾವು' ಸಂದರ್ಶಿಸಿ, ಅವರ

(4ನೇ ಪುಟಕ್ಕೆ)

# ಖಾದಿ ಮತ್ತು ಗ್ರಾಮೋದ್ಯೋಗದ ವ್ಯಾಪ್ತಿಗೆ ಇನ್ನಷ್ಟು ಕೈಗಾರಿಕೆಗಳು

ಖಾದಿ ಮತ್ತು ಗ್ರಾಮೋದ್ಯಮ ಮಂಡಳಿಯು ತನ್ನ ವ್ಯಾಪ್ತಿಯಲ್ಲಿ ಹಾಲಿ ಇರುವ 26 ಉದ್ಯಮಗಳ ಪಟ್ಟಿಗೆ ಇಷ್ಟೇ ಸಂಖ್ಯೆಯ ಹೊಸ ಉದ್ಯಮಗಳನ್ನು ಸೇರ್ಪಡೆ ಮಾಡಿ ಪ್ರೋತ್ಸಾಹಿಸುವ ಗುರಿ ಇಟ್ಟುಕೊಂಡಿದೆ.

ಕೆ. ವಿ. ಐ. ಸಿ.ಯ ಮಾನ್ಯತೆಯಡಿಯಲ್ಲಿ ಸೇರ್ಪಡೆಯಾಗುವ ಹೊಸ ಉದ್ಯಮಗಳಲ್ಲಿ, ಕಲ್ಲು ಕಡಿಯುವುದು, ಕಲ್ಲಿನಿಂದ ನಿರ್ಮಿಸಲಾಗುವ ನಿತ್ಯೋಪಯೋಗಿ ವಸ್ತುಗಳು, ಕಾಗದದ ಪಾತ್ರೆಗಳು, ಎಕ್ಸರ್‌ಸೈಜ್ ಪುಸ್ತಕ ಮತ್ತು ಸ್ಟೇಷನರಿ ತಯಾರಿಕೆ, ತಟ್ಟೆ, ಬುಟ್ಟಿ ಹೆಣೆಯುವುದು, ಅರಣ್ಯ ಉತ್ಪನ್ನಗಳ ಸಂಸ್ಕರಣ, ಫೋಟೋ ಕಟ್ಟು ಹಾಕುವುದು, ಕೆತ್ತನೆ ಕಾರ್ಯ, ಗೇರು ಸಂಸ್ಕರಣೆ, ಎಲೆ ದೊನ್ನೆ ತಯಾರಿ, ಪಿನ್ ಮತ್ತು ಕ್ಲಿಪ್‌ಗಳು, ಅಲಂಕಾರಿಕಾ ಬಲ್ಬು ಹಾಗೂ ಬಾಟ್ಲಿಗಳು, ಛತ್ರಿ, ಸವ ಹಾಗೂ ವಾಯುಶಕ್ತಿ ಚಾಲಿತ ಉಪಕರಣಗಳ ತಯಾರಿ, ಬನಿಯನ್, ಟೈಲರಿಂಗ್ ಮತ್ತು

# ಡೈರಿ ಅಧಿಕಾರಿಗಳ ಬುರುಡೆ ಲೆಕ್ಕ !

(2ನೇ ಪುಟದಿಂದ)

ಒಂದು–ಒಂದೂವರೆ ಲಕ್ಷ ಆದದ್ದು ಹೇಗೆ? ಈ ಬೊಗಳೆ ಸಮಜಾಯಿಷಿಯನ್ನು ಮಂತ್ರಿಗಳೂ ಒಪ್ಪಿ, ಭಾರೀ ಲುಕ್ಸಾನು ಆಗುತ್ತಿದೆ ಎಂಬ ಅಭಿಪ್ರಾಯ ತಳೆದಿರಬಹುದು.

ಇಂತಹುದೇ ಲೆಕ್ಕಗಳಿಂದಲೇ ಇರಬೇಕು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ಸತತವಾಗಿ ಲುಕ್ಸಾನು ತೋರಿಸುವುದು. ಅಲ್ಲವೆ?

ಇದನ್ನೆಲ್ಲ ಸರಿಪಡಿಸಲೋ ಅಥವಾ ಏತಕ್ಕೋ ಬಾಳೆಹೊನ್ನೂರಿಗೆ ಕಳಿಸಲಾದ ವಿಸ್ತರಣಾಧಿಕಾರಿ ಎಲ್ಲಿದ್ದಾರೋ ಪತ್ತೆಯಿಲ್ಲ.

ಇದೆಲ್ಲ ನೋಡಿದರೆ ನಿಜವಾಗಿಯೂ ಮಧ್ಯವರ್ತಿಗಳೇ ಸಾವಿರ ಪಾಲು ಉತ್ತಮ ಎನ್ನಿಸುತ್ತದೆ. ನಾವು ಹಾಕಿದ ಹಾಲಿಗೆ 25 ಪೈಸೆ ಕಡಿಮೆ ಸಿಕ್ಕಿದರೂ ಸಹ ಕಡೇ ಪಕ್ಷ ಹಣ ಸಂದಾಯವಾದರೂ ಕೂಡಲೇ ಆಗುತ್ತದೆ.

ಇಷ್ಟೆಲ್ಲ ಹಗರಣಗಳಾದರೂ ರೈತರ ಪರವಾಗಿ ಯಾವುದೇ ರೈತ ಸಂಘವಾಗಲೀ ರಾಜಕೀಯ ಪಕ್ಷಗಳಾಗಲಿ ಸೊಲ್ಲೆತ್ತದಿರುವುದು ಆಶ್ಚರ್ಯಕರ.

(ಸಂಪಾದಕರೆ, ಬರವಣಿಗೆಯ ಆಯಾಸ ಪರಿಹಾರವಾಯಿತೆ!?)

ಮಿಾನು ಬಲೆ ನೇಯ್ಗೆಯನ್ನು ಸೇರಿಸಲಾಗಿದೆ.

ಸೇವಾ ಕ್ಷೇತ್ರದಲ್ಲಿ [illegible] ಸಲ್ಲಿ ಜೋಡಣೆ, ವಿದ್ಯುತ್ [illegible] ದುರಸ್ತಿ, ಡೀಸೆಲ್ ಇಂಜಿನ್ ಪಂಪ್ [illegible] ಇವುಗಳನ್ನು ಹೊಸದಾಗಿ ಸೇರಿಸಲಾ[illegible] ಡುವಂತೆ ಕೇಂದ್ರ ಕೈಗಾರಿಕಾ ಅಭಿವೃದ್ಧಿ ರಾಜ್ಯ ಮಂತ್ರಿ ಎಂ. [illegible] ಕೆ.ವಿ.ಐ.ಸಿ.ಗೆ ತುರ್ತು ನಿರ್ದೇಶನ ನೀಡಿರುವುದಾಗಿ ತಿಳಿದು ಬಂದಿದೆ.

# ಜಿಲ್ಲಾ ಪರಿಷತ್ ಅಧ್ಯಕ್ಷತೆ: ಮೊಗಾ ಪ್ರತಿಕ್ರಿಯೆ

(3ನೇ ಪುಟದಿಂದ)
ಆಲೋಚನೆಗಳನ್ನು ತಿಳಿಯಲು ಪ್ರಯತ್ನಿಸಿತು. ಆ ಮಾತುಕತೆಯ ಸಾರಾಂಶ ಇಲ್ಲಿದೆ:

ಮುಂಜಾವು: ಒಂದು ವೇಳೆ ನೀವು ಅಧ್ಯಕ್ಷರಾದರೆ ನೀವು ಇಟ್ಟುಕೊಂಡಿರುವ ತಕ್ಷಣದ ಮತ್ತು ದೀರ್ಘಾವಧಿಯ ಗುರಿಗಳೇನು?

ಮೊಗಾ: ಸಾಮಾನ್ಯವಾಗಿ ಒಂದು ವರ್ಷದೊಳಗೆ ಯಾವ ಗಮನಾರ್ಹ ಸಾಧನೆಯೂ ಕಷ್ಟ. ಆದರೂ ಇರುವ ಮಿತಿಯೊಳಗೇ ಒಂದು ಮಾದರಿಯಾಗಿ ಕೆಲಸ ನಿರ್ವಹಿಸಬೇಕೆಂದಿದ್ದೇನೆ.

ನಮಗಿರುವ ಹಲವು ಪ್ರತಿಬಂಧಕಗಳು ಹೀಗಿವೆ– 1988–89ರ ಬಜೆಟ್ ಈಗಾಗಲೇ ಆಗಿ ಬಿಟ್ಟಿದೆ. ಏನಿದ್ದರೂ ಅದರೊಳಗೇ ಕೆಲಸ ಮಾಡಬೇಕು. ಅದರಲ್ಲೂ 33.5 ಕೋಟಿ ರೂ. ಬಜೆಟ್ಟಿನಲ್ಲಿ ಸುಮಾರು 20 ಕೋಟಿ ಕೇವಲ ಸಂಬಳ ಮತ್ತು ನಿರ್ವಹಣೆಯಂಥ (ಮೇಂಟೆನೆನ್ಸ್) ಯೋಜನೇತರ ವೆಚ್ಚಕ್ಕೇ ಹೋಗುತ್ತದೆ.

ಇನ್ನು ಹಲವು ಯೋಜನೆಗಳು, ಉದಾ: ಕೇಂದ್ರ ಸರ್ಕಾರದಿಂದ ಪ್ರೇರಿತ ಕೆಲಸಗಳು, ಗಿರಿಜನ ಯೋಜನೆಗಳು, ಸಾಮಾಜಿಕ ಅರಣ್ಯ– ಇತ್ಯಾದಿಗಳಲ್ಲಿ ಹಣ ಉಳಿಯಬಹುದು. ಅಥವಾ ಅಗತ್ಯಕ್ಕಿಂತ ಹೆಚ್ಚು ಹಣ ಇರಬಹುದು. ಆದರೆ ಇದರಲ್ಲೆಲ್ಲ ನಿಗದಿತ ಗುರಿಯನ್ನು ಬಿಟ್ಟು ಸರಿಯುವಂತಿಲ್ಲ.

ಜಿಲ್ಲಾ ಪರಿಷತ್ತೇ ರೂಪಿಸುವ ಕಾರ್ಯಕ್ರಮಗಳಿವೆ. ಆದರೆ ಸಾಕಷ್ಟು ಸಂಪನ್ಮೂಲವಿಲ್ಲ. ಇರುವ ಒಂದೇ ಅವಕಾಶವೆಂದರೆ, ಕೇಂದ್ರದ ಯೋಜನೆಗಳಲ್ಲಿ ನಾವು ಬಳಸಿದ ಆಹಾರ ಧಾನ್ಯದ ಪ್ರಮಾಣಕ್ಕೆ ಸರಿಯಾಗಿ ಕೇಂದ್ರ ಕೊಡುವ 'ಫುಡ್ ಅಡಿಶನಾಲಿಟಿ' ಎಂಬ ಹಣ. ಇದನ್ನು ಆದಷ್ಟೂ ಹೆಚ್ಚು ಗಳಿಸಿಕೊಳ್ಳಲು ಪ್ರಯತ್ನಿಸಬೇಕು. ಚಿಕ್ಕಮಗಳೂರು ಜಿ. ಪ. ಕಳೆದ ವರ್ಷ 57 ಲಕ್ಷ ಗಳಿಸಿತು. ಬೆಂಗಳೂರು ಗ್ರಾಮಾಂತರ ಜಿ. ಪ. 2.5 ಕೋಟಿ ಗಳಿಸಿದೆ. ಹೆಚ್ಚೆಚ್ಚು ರಾಷ್ಟ್ರೀಯ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಿದಂತೆ ಈ ಮೊತ್ತ ಜಾಸ್ತಿಯಾಗುತ್ತೆ. ನಾವೂ ಇದನ್ನೇ ಪ್ರಯತ್ನಿಸಬೇಕು.

ಅವರು ಅಧ್ಯಾಪಕರ ಕೊರತೆ ನೀಗಲು 300 ರೂ.ಗಳಿಗೆ ಸ್ಥಳೀಯ ಅಧ್ಯಾಪಕರನ್ನು, ಎಲ್ಲಾ ಪೂರ್ವಭಾವಿ ಆಯ್ಕೆ ಕ್ರಮಗಳನ್ನೂ ಅನುಸರಿಸಿ, ನೇಮಕ ಮಾಡಿದ್ದಾರೆ. ಇಂಥ ಕೆಲವು ಬೇರೆಯವರ ಮಾದರಿ ಅನುಭವಗಳನ್ನು ನಾವೂ ಅನುಸರಿಸಬಹುದು.

ಮುಂ: ದೀರ್ಘಾವಧಿ ಕೆಲಸಗಳಿಗೆ ಒಂದು ಸುಭದ್ರವಾದ, ಸುಸಂಬದ್ಧವಾದ ತಳಪಾಯ ಹಾಕಿಟ್ಟು ಪ್ರತಿವರ್ಷ ಅದರಲ್ಲಿ ಸ್ವಲ್ಪ ಸ್ವಲ್ಪ ಕೆಲಸ ಮುಂದುವರಿದುಕೊಂಡು ಹೋಗುವಂತೆ ಮಾಡಬಹುದಲ್ಲ. ಈ ವರ್ಷದ ಬಜೆಟ್ ಆಗಿ ಹೋಗಿದ್ದರೂ ಮುಂದಿನ ಬಜೆಟ್ ನಿಮ್ಮ ಕೈಲಿರುತ್ತೆ. ಆಗ ಈ ದಿಕ್ಕಿನಲ್ಲಿ ಸುದೀರ್ಘ ಆಲೋಚನೆಯಿಂದ ಕ್ರಮ ಅಳವಡಿಸಬಹುದಲ್ಲ.

ಮೊಗಾ: ಹೌದು. ಈ ಬಗ್ಗೆ ಗಮನ ಇಡುತ್ತೇನೆ.

ಇನ್ನು ಎರಡನೆಯದಾಗಿ, ಕುಡಿಯುವ ನೀರು ಪೂರೈಕೆಗೆ ಇನ್ನೂ ಹೆಚ್ಚು ಪ್ರಾಧಾನ್ಯ ಕೊಡಬೇಕೆಂಬುದು ನನ್ನ ಯೋಚನೆ.

ಮುಂ: ಮಲೆನಾಡಿನ ಈ ಪ್ರಾಂತ್ಯದ ಹವಾಗುಣ ಹಾಲು ಉತ್ಪಾದನೆಯ ಉದ್ಯಮಕ್ಕೆ ಬಹಳ ಪ್ರಶಸ್ತವಾಗಿದೆ ಎನ್ನುತ್ತಾರೆ. ಆದರೆ ಡೈರಿ ನಿಗಮದ ಅಧಿಕಾರಿಗಳ ನಿಷ್ಕಾಳಜಿಯಿಂದ ಇಲ್ಲಿ ಇಷ್ಟು ದಿನ ನಡೆದ ತಳಹದಿಯ ಪ್ರಯತ್ನಗಳು ಕೂಡ ಮಣ್ಣುಗೂಡಿರುವುದು ನಿಮಗೆ ಗೊತ್ತಾಗಿರಬಹುದು. ಕಾಫಿ, ರಬ್ಬರ್, ರೇಷ್ಮೆ, ಗೇರು, ಸೂರ್ಯಕಾಂತಿ, ದ್ವಿದಳ ಧಾನ್ಯ ಹೀಗೆ ಬೇರಾವುದೇ ರೀತಿಯ ಆರ್ಥಿಕ ಪ್ರಯೋಜನದ ಬೆಳೆಗಾದರೂ ಭೂಮಿ ಬೇಕೇಬೇಕು. ಆದರೆ ಈ ಕ್ಷೀರೋದ್ಯಮ ಕ್ರಮಬದ್ಧವಾಗಿ ಬೆಳೆದರೆ ಅದರಿಂದಾಗಿ ಏನೂ ಜಮೀನಿಲ್ಲದ ಬಡ ಕುಟುಂಬಗಳು ಕೂಡ ಅಭಿವೃದ್ಧಿ ಸಾಧಿಸಲು ಸಾಧ್ಯ. ಈಗ ನಮ್ಮ ಜಿಲ್ಲೆ ಹಾಸನ ಡೈರಿಯನ್ನು ಅವಲಂಬಿಸಿರುವುದನ್ನು ತಪ್ಪಿಸಿ, ನಮ್ಮ ಜಿಲ್ಲೆಗೇ ಒಂದು ಘಟಕ ಆರಂಭಿಸುವುದು ಬಹಳ ಅಗತ್ಯ ಮತ್ತು ಸೂಕ್ತ. ಈ ಬಗ್ಗೆ ನೀವೇನು ಯೋಚಿಸಿದ್ದೀರಿ?

ಮೊಗಾ: ಇದು ನಿಜ. ನಮ್ಮ ಜಿಲ್ಲಾ ಮಂತ್ರಿ ಬಿ. ಎಲ್. ಶಂಕರ್ ಕೂಡ ಇಂಥ ಯೋಚನೆ ಇಟ್ಟುಕೊಂಡಿದ್ದಾರೆ. ಈ ವಿಚಾರದಲ್ಲಿ ನಮ್ಮ ಜಿಲ್ಲಾ ಪರಿಷತ್ತು ಸಾಕಷ್ಟು ಕೆಲಸ ಮಾಡಬಹುದು. ಒಳ್ಳೆಯ ಯೋಜನೆ ಹಮ್ಮಿಕೊಳ್ಳಬಹುದು.

ಮುಂ: ಇನ್ನೊಂದು ಮುಖ್ಯ ಪ್ರಶ್ನೆ, ಈಗಿನ ಜಿ. ಪ. ಅಧ್ಯಕ್ಷರು ವಿರೋಧ ಪಕ್ಷದವರನ್ನು ಸಂತುಷ್ಟರಾಗಿಟ್ಟುಕೊಳ್ಳಲು ಏನು ಬೇಕಾದರೂ ಮಾಡುತ್ತಾರೆಂಬ ಪುಕಾರಿದೆ. ಕೆಲವು ಸಲ, ಉದಾ: ಆಸಗೋಡಿನ ದ್ರಾಕ್ಷಾ ಘಟಕದ ಕಟ್ಟಡದಂಥ ಸಂದರ್ಭಗಳಲ್ಲಿ, ಕೇವಲ ರಾಜಕೀಯ ಪರಿಗಣನೆಯಿಂದಾಗಿ ಅತ್ಯಂತ ಅವಶ್ಯಕವಾದ ಒಂದು ಕೆಲಸಕ್ಕೆ ಅಡ್ಡಗಾಲು ಬೀಳಬಹುದು. ಆಗೆಲ್ಲ ತುಂಬ ದೃಢವಾಗಿ, ಛಲದಿಂದ ಕೆಲಸ ಸಾಧಿಸಬೇಕಾಗುತ್ತದೆ. ಈಗ ನಮ್ಮ ಜಿಲ್ಲಾ ಪರಿಷತ್ತಿಗೆ ಅಂಥ ಒಬ್ಬ ಅಧ್ಯಕ್ಷರ ಅಗತ್ಯವಿದೆ, ಆದರೆ ನೀವು ಬಹಳ ಮೃದು– ಎಂಬ ಅಭಿಪ್ರಾಯವಿದೆಯಲ್ಲ?

ಮೊಗಾ: ನಾನು ಮೃದು ಎಂಬುದು ನಿಜವಿರಬಹುದು. ಆದರೆ ಅದು ಮಾತಿನಲ್ಲಿ ಅಥವಾ ವಿರೋಧಿಗಳೆನ್ನಿಸಿಕೊಂಡವರನ್ನು ಸಹ ಸಮಾಧಾನದಿಂದ ನಡೆಸಿಕೊಳ್ಳುವುದರಲ್ಲಿ ಹೊರತು, ಆಗಬೇಕಾದ ಕೆಲಸ ಸಾಧಿಸುವುದರಲ್ಲೂ ಹಾಗೇ ಎಂದು ತಿಳಿಯಬೇಕಾಗಿಲ್ಲ.

ಇದಕ್ಕೆ ಉದಾಹರಣೆಯಾಗಿ ಇವತ್ತು ನೀವು ಈ ನ.ರಾ.ಪುರವನ್ನೇ ನೋಡಬಹುದು. ಇಲ್ಲಿ ಆಗಿರುವ ಕೆಲಸ ಪ್ರತಿ ಹೆಜ್ಜೆ ಹೆಜ್ಜೆಗೂ ಯಾರ ಕಣ್ಣಿಗಾದರೂ ಎದ್ದು ಕಾಣುತ್ತದೆಂದುಕೊಂಡಿದ್ದೇನೆ. 70–80 ಲಕ್ಷ ರೂ. ಕಾಮಗಾರಿ ಮೂರ್ನಾಲ್ಕು ವರ್ಷದಲ್ಲಿ ಆಗಿದೆ.

ಇಲ್ಲಿನ ಪುರಸಭೆ ನೀರಿನ ಪೂರೈಕೆಗಾಗಿ ತನ್ನ ಪಾಲು ಶೇ. 10 ಭಾಗ ಹಣ (2.80 ಲಕ್ಷ ರೂ.) ಕಟ್ಟಲು ಸಾಧ್ಯವಿಲ್ಲದೆ ಕೆಲಸ ಆಗಿರಲಿಲ್ಲ. ಈ ಬಗ್ಗೆ ನಗರಾಡಳಿತ ಮಂತ್ರಿಗಳಲ್ಲಿ ಒತ್ತಾಯಿಸಿದಾಗ, 20 ಸಾವಿರಕ್ಕಿಂತ ಕಡಿಮೆ ಜನಸಂಖ್ಯೆಯ ಪುರಸಭೆಗಳು ಶೇ. 10ರ ಪಾಲನ್ನು ಕಟ್ಟುವುದು ಬೇಡವೆಂಬ ಆದೇಶವನ್ನು ಇಡೀ ರಾಜ್ಯಕ್ಕೆ ಅನ್ವಯಿಸಿ ಮಾಡಿದರು.

ಆಸ್ಪತ್ರೆ ಕಟ್ಟಡ, ಉರ್ದು ಶಾಲೆಯೂ ಸೇರಿದಂತೆ ಹಲವು ಶಾಲೆಗಳಿಗೆ ಕಟ್ಟಡಗಳು, ವಿಪುಲ ನೀರು ಕೊಡುವ ನಾಲ್ಕೈದು ಬೋರ್‌ವೆಲ್‌ಗಳು, 1.65 ಲಕ್ಷ ರೂ. ಚರಂಡಿ ಕೆಲಸ, ಆಸ್ಪತ್ರೆ ಎದುರಿಗೆ ಟಾರು ವಗೈರೆ 1.80 ಲಕ್ಷ ರೂ. ಮೊತ್ತದ ಕಾಮಗಾರಿಗಳು ಕೇವಲ ನನ್ನ ಪ್ರಯತ್ನದಿಂದಲೇ ಆದಂಥವೆಂಬುದು ನನಗೂ ಹೆಮ್ಮೆ, ಊರಿಗೂ ಗೊತ್ತಿದೆ.

ಮುಂ: ಒಟ್ಟಾರೆ ಜಿ. ಪ. ಅಧ್ಯಕ್ಷಗಿರಿಯ ನಿಮ್ಮ ಸಾಧ್ಯಾಸಾಧ್ಯತೆಗಳೇನು?

ಮೊಗಾ: ಅದು ಅಂತಿಮವಾಗಿ ಪಕ್ಷದ ವರಿಷ್ಠ ಮಂಡಳಿಯ, ವೀಕ್ಷಕರಾದ ದೇವೇಗೌಡ, ಬಿ. ಎಲ್. ಶಂಕರ್ ಇವರಿಗೆ ಬಿಟ್ಟದ್ದು. ಆದರೆ ಈವರೆಗೆ ಎಲ್ಲೂ ಪ್ರತಿರೋಧ ಕಂಡಿಲ್ಲ. ಶಾಸಕ ಗೋವಿಂದ ಗೌಡರು ಕೂಡ ಈಚೆಗೆ ದೇವೇಗೌಡರನ್ನು ಕಂಡು, "ಪಕ್ಷದಲ್ಲಿ ನಿಷ್ಠಾವಂತ ಕೆಲಸಕ್ಕೆ ಏನಾದರೂ ಬೆಲೆಯಿರುವುದಾದರೆ ಈ ಸಲ ಇವರಿಗೇ (ಮೊಗಾಗೆ) ಅಧ್ಯಕ್ಷ ಸ್ಥಾನ ಕೊಡಬೇಕು" ಎಂದು ಮನಃಪೂರ್ವಕ ಒತ್ತಾಯಿಸಿದ್ದಾರೆ.

ನಾನಂತೂ ಪಕ್ಷದ ಅತ್ಯಂತ ದುರ್ಭರ ದಿನಗಳಲ್ಲಿ, ಅತ್ಯಂತ ಪ್ರಲೋಭಕ ಸಂದರ್ಭಗಳಲ್ಲಿ ಕೂಡ ಪಕ್ಷಕ್ಕಾಗಿ ಶ್ರಮಿಸಿದ್ದೇನೆ. ಆದರೆ ಈವರೆಗೆ ಯಾವುದೇ ಅಧಿಕಾರಕ್ಕಾಗಿ ಕೇಳಿಲ್ಲ. ಅಧಿಕಾರದ ಒಂದೇ ಒಂದು ಸಣ್ಣ ಅವಕಾಶ ನನಗೆ ಸಿಕ್ಕಿದ್ದು ಜಿಲ್ಲಾ ಆಯ್ಕೆ ಸಮಿತಿಯಲ್ಲಿ (ಡಿಎಲ್.ಆರ್.ಸಿ.) ಅದರಲ್ಲಿ ನನ್ನ ಕೈ ಶುದ್ಧಿ, ದಕ್ಷತೆ, ಪ್ರಾಮಾಣಿಕತೆಗಳನ್ನು ರಾಜ್ಯ ಮಟ್ಟದಲ್ಲೇ ಏಕೈಕ ಎನ್ನುವಂತೆ ಸಾಬೀತು ಮಾಡಿ ತೋರಿಸಿದ್ದೇನೆ.

ಅಕಸ್ಮಾತ್ ಜಿಲ್ಲಾ ಪರಿಷತ್ ಅಧ್ಯಕ್ಷ ಸ್ಥಾನ ಸಿಕ್ಕರೂ ಕೂಡ ಇಷ್ಟೇ ನಿಸ್ವಾರ್ಥ ಭಾವದಿಂದ ಮಾದರಿಯಾಗುವಂತೆ ದುಡಿಯಬಲ್ಲೆನೆಂಬ ವಿಶ್ವಾಸ, ಅದಕ್ಕೆ ಬೇಕಾದಂಥ ಪರಿಶ್ರಮ ನನಗಿದೆ. ನಾನು ಇನ್ನೇನೂ ಹೇಳಬಯಸುವುದಿಲ್ಲ.

ಸಂದರ್ಶನ: ಸಿರಿಮನೆ ನಾಗರಾಜ್



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ.